ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ರಾಜ್ಯದಲ್ಲಿರುವ ಗೃಹ ರಕ್ಷಕ ಸಿಬ್ಬಂದಿಗಳಿಗೆ ಅಗತ್ಯ ಸೌಲಭ್ಯಗಳನ್ನು ನೀಡುವ ಬಗ್ಗೆ

ಶ್ರೀ ಎಂ.ಪಿ.ಸುನೀಲ್ ಸುಬ್ರಮಣಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

1218 (1484) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಗೃಹ ರಕ್ಷಕ ಸಿಬ್ಬಂದಿಗಳ ಸಂಖ್ಯೆ ಎಷ್ಟು ; (ಜಿಲ್ಲಾವಾರು ವಿವರ ನೀಡುವುದು)

(ಆ) ಇವರುಗಳಿಗೆ ನೀಡಲಾಗುವ ವೇತನ, ಇತರೆ ಸೌಲಭ್ಯಗಳ ವಿವರಗಳನ್ನು ನೀಡುವುದು ; ಇವರುಗಳ ವೇತನವನ್ನು ಹೆಚ್ಚಿಸಲು ಸರ್ಕರದ ಕ್ರಮಗಳೇನು ;

(ಇ) ಇವರುಗಳಿಗೂ ಸಹ ಪೊಲೀಸರಿಗೆ ನೀಡುವಂತಹ ಕಿಟ್‌ಗಳನ್ನು ಸವಲತ್ತುಗಳನ್ನು ನೀಡಲು ಸರ್ಕಾರದ ನಿಲುವೇನು ;

(ಈ) ಈ ಗೃಹ ರಕ್ಷಕ ಸಿಬ್ಬಂದಿಗಳ ಜೀವನ ಮಟ್ಟವನ್ನು ಸುಧಾರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು)